# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 713
ಮಾನ್ಯ ಸದಸ್ಯರ ಹೆಸರು : ಶ್ರೀ ಪ್ರಕಾಶ್ ಕೆ.ರಾಥೋಡ್ (ನಾಮನಿರ್ದೇಶನ ಹೊಂದಿದವರು)
ಉತ್ತರಿಸಬೇಕಾದ ದಿನಾಂಕ : 20-12-2021
ಉತ್ತರಿಸುವ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

* * *

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಕೋವಿಡ್-19 ಕೊರೋನಾ ಸಾಂಕ್ರಾಮಿಕ ರೋಗಕ್ಕೆ ಮೊದಲನೆ ಲಸಿಕೆ ಪಡೆದವರ ಸಂಖ್ಯೆ ಎಷ್ಟು; | ರಾಜ್ಯದಲ್ಲಿ ದಿನಾಂಕ:14.12.2021ರ ಅಂತ್ಯಕ್ಕೆ ಒಟ್ಟು 4.66 ಕೋಟಿ (4,66,41,680) (ಶೇ. 95 ರಷ್ಟು) ಫಲಾನುಭವಿಗಳಿಗೆ ಮೊದಲನೇ ಡೋಸ್ ಲಸಿಕೆ ನೀಡಲಾಗಿದೆ. |
| ಆ | ಎರಡನೆಯ ಲಸಿಕೆ ನೀಡಲು ಸರ್ಕಾರ ಹಮ್ಮಿಕೊಂಡಿರುವ ಕಾರ್ಯಕ್ರಮಗಳೇನು; ಎರಡನೇ ಲಸಿಕೆ ಯಾವಾಗ ಪೂರೈಸಲಾಗುವುದು? (ಸಂಪೂರ್ಣ ಮಾಹಿತಿ ನೀಡುವುದು) | ಎರಡನೇ ಡೋಸ್ ಲಸಿಕೆ ನೀಡಲು ಸರ್ಕಾರವು ಈ ಕೆಳಕಂಡ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದು ಅದರಂತೆ ಕ್ರಮ ಕೈಗೊಳ್ಳಲಾಗುತ್ತಿದೆ.<br>• ರಾಜ್ಯದಲ್ಲಿ ಪ್ರತಿ ಬುಧವಾರದಂದು ಲಸಿಕಾ ಮೇಳವನ್ನು ನಡೆಸಲಾಗುತ್ತಿದೆ.<br>• ಆಶಾ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ ಭೇಟಿ ನೀಡಿ ಅರ್ಹ ಫಲಾನುಭವಿಗಳನ್ನು ಹತ್ತಿರದ ಲಸಿಕಾ ಕೇಂದ್ರಕ್ಕೆ ಸಜ್ಜುಗೊಳಿಸಿ ಲಸಿಕಾಕರಣ ನಡೆಸಲಾಗುತ್ತಿದೆ.<br>• ವಿಕಲಚೇತನರು, ವಯಸ್ಕರು, ಮಾನಸಿಕ ಅಸ್ವಸ್ಥರು ಮತ್ತು ಹಾಸಿಗೆ ಹಿಡಿದಿರುವವರ ಮನೆಗೆ ಹೋಗಿ ಲಸಿಕಾಕರಣ ನಡೆಸಲಾಗುತ್ತಿದೆ.<br>• ಧಾರ್ಮಿಕ ಮುಖಂಡರು, ಇತರೆ ಇಲಾಖೆಗಳು ಮತ್ತು NGOಗಳ ಸಹಕಾರದೊಂದಿಗೆ ಲಸಿಕೆ ಹಿಂಜರಿಕೆಯಿಂದಾಗಿ ಲಸಿಕೆ ಪಡೆಯದ ಸಮುದಾಯಗಳಿಗೆ ಭೇಟಿ ನೀಡಿ ತಿಳುವಳಿಕೆ ನೀಡಲಾಗುತ್ತಿದೆ ಹಾಗೂ ಎರಡೂ ಡೋಸ್ ಲಸಿಕಾಕರಣದ ಕುರಿತು ಜಾಗೃತಿ ಮೂಡಿಸಲಾಗುತ್ತಿದೆ.<br>• ಒಂದೂ ಡೋಸ್ ಲಸಿಕೆ ಪಡೆಯದ ಫಲಾನುಭವಿಗಳನ್ನು ಗುರುತಿಸಲು "ಮತದಾರರ ಪಟ್ಟಿಯನ್ನು" ಬಳಸಿಕೊಳ್ಳಲಾಗುತ್ತಿದೆ.<br>• ಕೊಳಚೆ ಪ್ರದೇಶದಲ್ಲಿ ವಾಸಿಸುವವರು, ಅಲೆಮಾರಿ ಜನಾಂಗ, ನಿರ್ಗತಿಕರು ಮತ್ತು ತಲುಪಲು ಕಷ್ಟಸಾಧ್ಯ ಪ್ರದೇಶಗಳಲ್ಲಿ ವಾಸಿಸುವವರ ಲಸಿಕಾಕರಣಕ್ಕಾಗಿ ಮೊಬೈಲ್ ಲಸಿಕಾ ವಾಹನಗಳನ್ನು ಬಳಸಲಾಗುತ್ತಿದೆ.<br>• ಲಸಿಕಾಕರಣದ ಕೊನೆಯ ಮೈಲಿಗಲ್ಲನ್ನು ತಲುಪುವಲ್ಲಿ ಇರುವ ಸವಾಲುಗಳಾದ ಲಸಿಕೆ ಹಿಂಜರಿಕೆ, ನಿರಾಕರಣೆ ಮತ್ತು |

| | | |
|---|---|---|
| | | ಲಸಿಕಾಕರಣದ ಕುರಿತ ಸುಳ್ಳು ವದಂತಿ ಇವುಗಳನ್ನು ಸೂಕ್ತವಾಗಿ ಪರಿಹರಿಸಲಾಗುತ್ತಿದೆ.<br>• ಮಿಷನ್ ಇಂದ್ರಧನುಷ್ ಮತ್ತು ಪಲ್ಸ್ ಪೋಲಿಯೊ ಕಾರ್ಯಕ್ರಮದ ವಿಧಾನಗಳಾದ ಮನೆ ಮನೆ ಸಮೀಕ್ಷೆ ಮತ್ತು ವೈಯುಕ್ತಿಕ ಸಂವಹನ ಕಾರ್ಯತಂತ್ರಗಳನ್ನು ಅಳವಡಿಸಿಕೊಳ್ಳಲಾಗಿದೆ ಹಾಗೂ ಧಾರ್ಮಿಕ ಮುಖಂಡರ ಮುಖಾಂತರ ಜಾಗೃತಿ ಮೂಡಿಸಲಾಗುತ್ತಿದೆ.<br>• ಸಮುದಾಯ ಸಜ್ಜುಗೊಳಿಸುವಿಕೆಗಾಗಿ ಗ್ರಾಮೀಣ ಕಾರ್ಯಪಡೆ ಸಭೆಗಳನ್ನು ಸಕ್ರಿಯಗೊಳಿಸಲಾಗಿದೆ.<br>• ಲಸಿಕಾಕರಣ ಕುರಿತ ತಾಂತ್ರಿಕ ಸಮಸ್ಯೆಗಳು, ಲಸಿಕೆ ಸಂಬಂಧಿತ, ಲಾಜಿಸ್ಟಿಕ್ ಮತ್ತು ಇತರ ಸಮಸ್ಯೆಗಳು ಹಾಗೂ ಎಲ್ಲಾ ಹಂತಗಳಲ್ಲಿ ಪ್ರಶ್ನೆಗಳನ್ನು ಪರಿಹರಿಸಲು ರಾಜ್ಯ ಮತ್ತು ಜಿಲ್ಲಾ ನಿಯಂತ್ರಣ ಕೊಠಡಿಗಳನ್ನು ಸ್ಥಾಪಿಸಲಾಗಿದೆ.<br>• ಎರಡನೇಡೋಸ್ ಬಾಕಿ ಇರುವ ಫಲಾನುಭವಿಗಳಿಗೆ ಫೋನ್ ಕರೆಗಳು ಮತ್ತು SMS ಮೂಲಕ ನಿರಂತರ ಅನುಸರಣಾ ಕಾರ್ಯ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ.<br>• ಲಸಿಕಾಕರಣದ ಬಗ್ಗೆ ತಪ್ಪು ತಿಳಿವಳಿಕೆ ಅಥವಾ ತಪ್ಪು ಮಾಹಿತಿಯ ಸಮಸ್ಯೆಗಳನ್ನು ಪರಿಹರಿಸಲು ವಿವಿಧ ಶ್ರವಣ-ದೃಶ್ಯ ಮಾಧ್ಯಮ ಮತ್ತು ಸಾಮಾಜಿಕ ಮಾಧ್ಯಮಗಳಲ್ಲಿ ವಿಡಿಯೋಗಳು/ಮಾತುಕತೆಗಳನ್ನು ಮಾಡಲಾಗುತ್ತಿದೆ.<br>• ಒಂದೂ ಡೋಸ್ ಲಸಿಕೆ ಪಡೆಯದವರಿಗೆ ಮತ್ತು ಎರಡನೇ ಡೋಸ್‌ಗೆ ಬಾಕಿ ಇರುವ ಫಲಾನುಭವಿಗಳಿಗೆ ಹೆಚ್ಚು ಗಮನ ನೀಡಲಾಗುತ್ತಿದೆ.<br>• ಮನೆಯ ಹತ್ತಿರದ ಲಸಿಕಾಕರಣ ಮತ್ತು ಮೊಬೈಲ್ ಲಸಿಕಾ ವಾಹನಗಳ ಬಳಕೆಯಿಂದ ಗ್ರಾಮೀಣ ಪ್ರದೇಶಗಳಲ್ಲಿ ಶೇ. 100 ರಷ್ಟು ಲಸಿಕಾಕರಣ ಪ್ರಗತಿ ಸಾಧಿಸಲು ಶ್ರಮಿಸಲಾಗುತ್ತಿದೆ.<br>• ಭಾರತ ಸರ್ಕಾರದ ಮಾರ್ಗಸೂಚಿಯಂತೆ, ದಿನಾಂಕ: 03.11.2021ರಿಂದ ರಾಜ್ಯದಲ್ಲಿ "ಮನೆ ಮನೆಗೆ ಲಸಿಕಾ ಮಿತ್ರ" ಅಭಿಯಾನವನ್ನು ಅನುಷ್ಠಾನಗೊಳಿಸಲಾಗಿದೆ. |

**ಕಡತ ಸಂಖ್ಯೆ: ಆಕುಕ 713 ಚುರಪ್ರ 2021**

(ಡಾ|| ಕೆ.ಸುಧಾಕರ್)

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ**
**ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು**